

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1737 (2076)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಕಂದಾಯ ಸಚಿವರು

ವಿಷಯ : 11-ಇ ನಕ್ಷೆಯ ಗೊಂದಲದ ಕುರಿತು

(ಅ) ರಾಜ್ಯದಲ್ಲಿ 11-ಇ ನಕ್ಷೆಯನ್ನು ಯಾವ ಯಾವ ಉದ್ದೇಶಗಳಿಗೆ ಬಳಸಲಾಗುತ್ತಿದೆ ; 11-ಇ ನಕ್ಷೆಯನ್ನು ಪಡೆಯಲು ಅಗತ್ಯವಾದ ದಾಖಲೆಗಳು ಯಾವುವು ; ಅನುಸರಿಸಬೇಕಾದ ಕ್ರಮಗಳು ಯಾವುವು; (ಆದೇಶದ ಪ್ರತಿ ಒದಗಿಸುವುದು )

(ಆ) ಯಾವ ಯಾವ ಸಂದರ್ಭದಲ್ಲಿ ಭೂಸ್ವಾಧೀನತೆಯ ಮ್ಯೂಟೇಶನ್ ಮಾಡಲು 11-ಇ ನಕ್ಷೆಯಿಂದ ವಿನಾಯಿತಿಯನ್ನು ನೀಡಲಾಗಿದೆ; (ಆದೇಶದ ಪ್ರತಿಯನ್ನು ನೀಡುವುದು) ಈ ಕುರಿತು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲಾಗಿದೆಯೇ;

(ಇ) ರಾಜ್ಯದ ಸಿವಿಲ್ ನ್ಯಾಯಾಲಯದ ಡಿಕ್ರಿ ಆದೇಶದ ಮೂಲಕ ಪಹಣಿ ಮತ್ತು ಖಾತಾ ಮ್ಯೂಟೇಶನ್ ಸಂದರ್ಭದಲ್ಲಿ ನ್ಯಾಯಾಲಯವು ಅನುಮೋದಿಸಿದ ಜಾಗದ ನಕ್ಷೆಯ ಬದಲು ಹೊಸದಾಗಿ 11-ಇ ನಕ್ಷೆಯನ್ನು ಕೋರುತ್ತಿರುವುದರಿಂದ ಅರ್ಜಿದಾರರು ತೊಂದರೆಯನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಅರ್ಜಿದಾರರು ನ್ಯಾಯಾಂಗ ನಿಂದನೆ ಅರ್ಜಿ ದಾಖಲಿಸಿರುವುದಕ್ಕೆ ಸರ್ಕಾರದ ಕ್ರಮವೇನು ?